# ಕಲಿಕಾ ಸಾಮಗ್ರಿಗಳ ದೃಷ್ಟಿಕೋನದ ವಿಕಾಸ

**ಹೃದಯಕಾಂತ್ ದಿವಾನ್**

ಮಕ್ಕಳಿಗೆ ಕಲಿಯಲು ಸಹಾಯ ಮಾಡುವಲ್ಲಿ ಸಾಮಗ್ರಿಗಳು ಮುಖ್ಯವಾಗಿರಬಹುದು. ಚಿಕ್ಕ ಮಗು ತನ್ನ ಸುತ್ತಲಿನ ವಸ್ತುಗಳೊಂದಿಗೆ ಸಂವಹನ ನಡೆಸುತ್ತದೆ, ಮಾತುಕತೆಯಲ್ಲಿ ತೊಡಗಿಕೊಳ್ಳುತ್ತದೆ ಮತ್ತು ಅಭಿನಯಿಸುತ್ತಾ ಅದರೊಂದಿಗೆ ಆಟವಾಡುವುದನ್ನು ಕಲಿಯುತ್ತದೆ. ಆರಂಭದಲ್ಲಿ, ಇಂದ್ರಿಯಗಳು, ಚಲನಾ ಸಾಮರ್ಥ್ಯಗಳು ಮತ್ತು ನಂತರದ ಸಾಮಾನ್ಯ ವಿಶ್ಲೇಷಣೆಯು ಸುತ್ತಮುತ್ತಲಿನ ವಸ್ತುಗಳ ಅವಲೋಕನಗಳ ಮೂಲಕ ಮತ್ತು ವಿವಿಧ ಸಂರ್ಭಗಳಲ್ಲಿ ಅವುಗಳು ತರ್ಪಡಿಸುವ ನಡವಳಿಕೆಯ ಮೂಲಕ ಬೆಳವಣಿಗೆಯಾಗುತ್ತದೆ. ವಸ್ತುಗಳೊಂದಿಗೆ ಮಗುವು ಈ ಸಂವಹನವನ್ನು ಸ್ವಯಂಪ್ರೇರಿತವಾಗಿ ನಡೆಸುತ್ತದೆ ಮತ್ತು ಇದನ್ನು ತನಗೆ ತಾನೇ ಬೇಕಾದ ಹಾಗೆ ನಿರ್ದೇಶಿಸಿಕೊಳ್ಳುತ್ತದೆ. ಇಲ್ಲಿ ಪರಸ್ಪರ ಹೇಗೆ ಸಂವಹನ ನಡೆಸಬೇಕು ಎಂಬುದನ್ನು ಅದೇ ನಿರ್ಧರಿಸುತ್ತದೆ. ಆದರೆ ಮಕ್ಕಳ ಅನ್ವೇಷಣೆಗೆ ಹೆಚ್ಚಾಗಿ ವಯಸ್ಕರ ಅನುಮೋದನೆ ದೊರಕುವುದಿಲ್ಲ. ಅವರ ಆಟದ ಸುತ್ತ ಮತ್ತು ಪೂರ್ವ-ನಿರ್ಧರಿತ ಉದ್ದೇಶಗಳ ಗಡಿಗಳನ್ನು ವಿಸ್ತರಿಸುವಲ್ಲಿ, ನಿರೀಕ್ಷಿತ ನಡವಳಿಕೆಯ ಮಾದರಿಗಳನ್ನು ನಿರೀಕ್ಷಿಸುವುದರಲ್ಲಿ ಮತ್ತು ಇದೇ ರೀತಿಯ ಇತರ ನಿರ್ಬಂಧಗಳ ಕುರಿತು ವಯಸ್ಕರಲ್ಲಿ ಒಂದಷ್ಟು ಹಠಮಾರಿತನವಿದೆ. ನಾವು ವಯಸ್ಕರಾಗಿ, ಮಕ್ಕಳು ಬೇರೆ ಬೇರೆ ವಸ್ತುಗಳನ್ನು ಅನ್ವೇಷಿಸುವ ಪ್ರಯತ್ನದಲ್ಲಿ ತೊಡಗಿರುವಾಗ ಅವರು ರಚಿಸುವ ಆಟಗಳಲ್ಲಿ ಮಕ್ಕಳೊಂದಿಗೆ ಆಡಿದ್ದೇವೆ. ನಾವು ನಿರ್ದಿಷ್ಟ ಗುರಿಗಾಗಿ ಮತ್ತು ನಿರ್ದಿಷ್ಟ ಉದ್ದೇಶಗಳಿಗಾಗಿ ವಸ್ತುಗಳನ್ನು ತಂದಾಗಲೂ ಅವರು ತಮ್ಮದೇ ಆದ ನಿರ್ದಿಷ್ಟ ಉದ್ದೇಶಗಳು ಮತ್ತು ಸಂವಹನ ವಿಧಾನವನ್ನು ಕಂಡುಕೊಳ್ಳುತ್ತಾರೆ.

ಈ ಪರಸ್ಪರಾನುಕ್ರಿಯೆಯಲ್ಲಿ, ತಿಳಿದುಕೊಳ್ಳಬೇಕಾಗಿರುವುದು ಏನೆಂದರೆ ವಸ್ತುಗಳೊಂದಿಗೆ ಆಟವಾಡುವುದು ಕಲಿಕೆಗೆ ಅತ್ಯಗತ್ಯ. ವಸ್ತುಗಳ ಈ ಅರ್ಥವು ಬೋಧನಾ ಕಲಿಕಾ ಸಾಮಗ್ರಿಗಳು (ಟಿಎಲ್ಎಮ್) ರೂಪುಗೊಂಡಿರುವ ವಿಧಾನಕ್ಕಿಂತ ಎರಡು ಪ್ರಮುಖ ರೀತಿಯಲ್ಲಿ ಭಿನ್ನವಾಗಿದೆ. ಒಂದು, ಈ ವಸ್ತುಗಳು ಕಲಿಕೆಯ ಯಾವುದೇ ಒಂದು ನಿರ್ದಿಷ್ಟ ಕ್ಷೇತ್ರಕ್ಕೆ ಸೀಮಿತವಾಗಿಲ್ಲ ಮತ್ತು ಖಂಡಿತವಾಗಿಯೂ ಕೆಲವು ಪರಿಕಲ್ಪನೆಗಳಿಗೆ ಸೀಮಿತವಾಗಿಲ್ಲ ಮತ್ತು ಎರಡನೆಯದಾಗಿ, ಅವು ನಿರ್ದಿಷ್ಟವಾಗಿ ಬೋಧನೆ ಮತ್ತು ಕಲಿಕೆಯ ಕಲ್ಪನೆಯೊಂದಿಗೆ ಸಂಬಂಧ ಹೊಂದಿಲ್ಲ. ಇತರ ಕೆಲವು ಅಂಶಗಳಂತೆ, ತರಗತಿಯಲ್ಲಿ ಟಿಎಲ್ಎಂಗಳ ಬಗ್ಗೆ ಮಾತನಾಡುವ ಸಾಧ್ಯತೆಗಳು, ಅಪಾಯಗಳು ಮತ್ತು ಪ್ರಯೋಜನಗಳನ್ನು ಅರ್ಥಮಾಡಿಕೊಳ್ಳಲು ಈ ಅಂಶಗಳು ಮುಖ್ಯವಾಗಿವೆ, ಅಲ್ಲಿ ಸಾಮಗ್ರಿಗಳು ಮತ್ತು ಸನ್ನಿವೇಶಗಳು ಮಕ್ಕಳಿಗೆ ತಮ್ಮ ಕೈಚಳಕವನ್ನು ತೋರಿಸಲು ಮತ್ತು ಮಕ್ಕಳು ತಮಗಾಗಿ ಮಾಡಿಕೊಳ್ಳುವ ಸಂಕ್ಷಿಪ್ತ ಅಧ್ಯಯನಗಳಿಗಾಗಿ ಅವಕಾಶಗಳನ್ನು ಸೃಷ್ಟಿಸಲು ಅನುವು ಮಾಡಿಕೊಡಬೇಕಾಗುತ್ತದೆ. ಆದ್ದರಿಂದ ಈ ಬಳಕೆಯನ್ನು ನಿಯಂತ್ರಿಸುವ ತತ್ವಗಳ ಕುರಿತು ತಿಳಿದಿರಬೇಕು ಮತ್ತು ಶಿಕ್ಷಕರಾಗಿ ಹಾಗು ಪಠ್ಯಕ್ರಮ ಅಥವಾ ಕಲಿಕಾ ಸಾಮಗ್ರಿಗಳ ಅಭಿವೃದ್ಧಿಗೊಳಿಸುವವರಾಗಿ ನಾವು ತಿಳಿದಿರಬೇಕಾದ ಕಾಳಜಿಗಳು ಮತ್ತು ಕೇಳಿಕೊಳ್ಳಬೇಕಾಗಿರುವ ಪ್ರಶ್ನೆಗಳನ್ನು ಮನಸ್ಸಿನಲ್ಲಿಟ್ಟುಕೊಳ್ಳುವುದು ಬಹಳ ಮುಖ್ಯ.

ಇಲ್ಲಿ ಗಮನಿಸಬೇಕಾದ ಇನ್ನೊಂದು ಅಂಶವೆಂದರೆ ಕಲಿಕೆಯ ಮತ್ತು ಪರಿಕಲ್ಪನೆಗಳ ಸ್ವರೂಪ. ವಾಸ್ತವವಾಗಿ, ಮತ್ತು ಸಂಪೂರ್ಣವಾಗಿ ಪ್ರಸ್ತುತ ಸಂದರ್ಭದಲ್ಲಿ ಮಾನವ

ಪರಿಕಲ್ಪನೆಗಳು ಮತ್ತು ಅವುಗಳ ಆಧಾರದ ಮೇಲೆ ನಿರ್ಮಿಸಲಾದ ಪರಿಕಲ್ಪನಾ ರಚನೆಗಳನ್ನು ಸಾಮಗ್ರಿಗಳ ಅನುಪಸ್ಥಿತಿಯಲ್ಲಿ ಉಳಿಸಿಕೊಳ್ಳಲಾಗುತ್ತದೆ. ನಾವು ಈಗ ಅವುಗಳ ಅನುಪಸ್ಥಿತಿಯಲ್ಲಿ ಅವುಗಳ ಬಗ್ಗೆ ಮಾತನಾಡುವ ಮತ್ತು ವಸ್ತುಗಳನ್ನು ಹಾಗು ಘಟನೆಗಳನ್ನು ದೃಶ್ಯೀಕರಿಸುವ ಸಾಮರ್ಥ್ಯವನ್ನು ಅಭಿವೃದ್ಧಿಪಡಿಸಿದ್ದೇವೆ. ಕಲಿಕೆಯ ಉದ್ದೇಶವು ಮೂರ್ತಸ್ವರೂಪದಿಂದ ದೂರ ಸರಿದು, ಕಲ್ಪನೆಗಳು ಮತ್ತು ರಚನೆಗಳೊಂದಿಗೆ ತೊಡಗಿಸಿಕೊಳ್ಳುತ್ತದೆ ಮತ್ತು ಈವರೆಗೂ ನೋಡದ ಅಥವಾ ಎಂದಿಗೂ ನೋಡದ ಮತ್ತು ಬಹುಶಃ ಅಸ್ತಿತ್ವದಲ್ಲಿಯೇ ಇರದ ಸಂಯೋಜನೆಗಳನ್ನು ನಿರ್ಮಿಸುತ್ತದೆ. ಈ ಕಲ್ಪನೆಗಳು ಮನಸ್ಸಿನಲ್ಲಿ ನಿರ್ಮಿಸಲ್ಪಟ್ಟಿವೆ ಮತ್ತು ನಾವು ಈ ಸಾಮರ್ಥ್ಯವನ್ನು ಚುರುಕುಗೊಳಿಸಲು ಬಯಸುತ್ತೇವೆ, ಸಾಮಗ್ರಿಗಳನ್ನು ಆಧಾರಗಳು ಮತ್ತು ತಾತ್ಕಾಲಿಕ ಸಲಕರಣೆಗಳಾಗಿ ಪರಿಗಣಿಸುವ ಅಗತ್ಯ ಮತ್ತು ಅಮೂರ್ತತೆಯ ಸಾಮರ್ಥ್ಯವನ್ನು ಅಭಿವೃದ್ಧಿಪಡಿಸುವ ಸಾಧನವಾಗಿ ಬಳಸುವುದು ಇದರ ಸೂಚನೆಯಾಗಿದೆ. ಇದರ ಇರುವಿಕೆ ಜೀವನದ ಅತ್ಯಗತ್ಯ ಭಾಗವಾಗಿರುವುದರ ಹೊರತಾಗಿಯೂ ಮತ್ತು ನಾವು ಯಾವುದರೊಂದಿಗೆ ಅಥವಾ ಯಾವುದರ ಮೇಲೆ ಕೆಲಸ ಮಾಡುತ್ತೇವೋ ಅದರ ಹೊರತಾಗಿದೆ. ಇಲ್ಲಿ ಗಮನಿಸಬೇಕಾದ ವಿಷಯವೆಂದರೆ, ನಾವು ಯಾವುದನ್ನಾದರೂ ಹೆಸರಿಸುವಾಗ ಮತ್ತು ಅದರೊಂದಿಗೆ ಸಂಯೋಜಿಸುವಾಗ ನಮ್ಮ ಕಲ್ಪನೆಗಳಲ್ಲಿ ಮತ್ತು ನಮ್ಮ ಸಂಭಾಷಣೆಗಳಲ್ಲಿ ಅವುಗಳನ್ನು ಮೀರಿ ಹೋಗಲು ಕಲಿಯಬೇಕು. ಏಕೆಂದರೆ ನಾವು ಏನನ್ನಾದರೂ ಹೆಸರಿಸಿ ಅದಕ್ಕೆ ಗುಣಲಕ್ಷಣಗಳು ಮತ್ತು ನಡವಳಿಕೆಯನ್ನು ಜೋಡಿಸುತ್ತಾ, ಆರೋಪಿಸುತ್ತಾ ಹೋಗುತ್ತೇವೆ ಆದರೆ ಅದು ಬದಲಾವಣೆಗೆ ಒಳಗಾಗುತ್ತಲೇ ಇರುತ್ತದೆ. ಇಲ್ಲಿ ಪ್ರಶ್ನೆಯು ಸಾಮಗ್ರಿಗಳ ಅಗತ್ಯದ ಬಗ್ಗೆ ಅಲ್ಲ ಆದರೆ ಉದ್ದೇಶ, ಸಂರ್ಬ ಮತ್ತು ಬಳಕೆಯ ವಿಧಾನದ ಬಗ್ಗೆ ಇದೆ.

ಆ ಕ್ಷೇತ್ರದಲ್ಲಿನ ಹೆಚ್ಚಿನ ಕಲಿಕಾ ಸಿದ್ಧಾಂತಗಳು ಮತ್ತು ಸಂಶೋಧಕರು ಸಾಮಗ್ರಿಗಳ ಬಳಕೆಯನ್ನು ಸೂಚಿಸಿದ್ದಾರೆ ಎಂದು ಸಾಮಾನ್ಯವಾಗಿ ವಾದಿಸಲಾಗುತ್ತದೆ. ಮಾಂಟೆಸ್ಸರಿ ಶಾಲೆಗಳ ಕಲಿಕೆಯು ಮೂರ್ತತೆಯಿಂದ ಅಮೂರ್ತತೆಗೆ ಹೋಗುವ ಕುರಿತು ಮಾತನಾಡುತ್ತದೆ. ಅಲ್ಲದೆ, ಪಿಯಾಜೆ ಮತ್ತು ವೈಗೋಟ್ಸ್ಕಿ ಕೂಡ ಮೂರ್ತ ಕಲ್ಪನೆಗಳಿಂದ ಅಮೂರ್ತತೆಗೆ ಹೋಗುವ ಬಗ್ಗೆ ಮಾತನಾಡುತ್ತಾರೆ. ಆದರೆ ಇದರ ಹೊರತಾಗಿಯೂ ಕಲಿಕೆಗೆ ಸಂಬಂಧಿಸಿದ ಸಾಮಗ್ರಿಗಳ ಬಳಕೆ ಮತ್ತು ಪ್ರಾಮುಖ್ಯತೆಯನ್ನು ಸೂಕ್ಷ್ಮವಾಗಿ ಗಮನಿಸುವುದು ಮುಖ್ಯವಾಗಿದೆ. ಮರ್ತ ಸಾಮಗ್ರಿಗಳು ಕಲಿಕೆಗೆ ಅತ್ಯಂತ ಮಹತ್ತರ ಮತ್ತು ನಿರ್ಣಾಯಕ ಅಂಶಗಳಾಗಿವೆ ಎಂದು ಅವರು ಸೂಚಿಸುವುದಿಲ್ಲ ಅಥವಾ ಎಲ್ಲವನ್ನೂ ಕಲಿಯಲು ಅಗತ್ಯವೆಂದು ಸೂಚಿಸುವುದಿಲ್ಲ. ಮಕ್ಕಳಿಗೆ ಅವರ ಕೈಚಳಕ ತೋರಲು, ಅನ್ವೇಷಿಸಲು, ಆಟವಾಡಲು, ಸಣ್ಣ ಪ್ರಯೋಗಗಳು ಮತ್ತು ಅಧ್ಯಯನಗಳನ್ನು ಮಾಡುವ ಅವಕಾಶಗಳನ್ನು ಒದಗಿಸುವ ಸಂದರ್ಭಗಳನ್ನು ಅವರು ಶಿಫಾರಸ್ಸು ಮಾಡುತ್ತಾರೆ. ವೈಗೋಟ್ಸ್ಕಿ, ತನ್ನ ಸೂತ್ರೀಕರಣಗಳಲ್ಲಿ, ಹೆಚ್ಚು ಜ್ಞಾನವುಳ್ಳ ಒರಗೆಯವನಾಗಿ ವಯಸ್ಕನ ಪಾತ್ರವನ್ನು ಒತ್ತಿಹೇಳುತ್ತಾರೆ ಮತ್ತು ಕಲಿಕೆಗೆ ಅಗತ್ಯವಾದ ಮಾನವರ ನಡುವಿನ ಸಂವಹನ ಮತ್ತು ಸಂಭಾಷಣೆಯನ್ನು ಸೂಚಿಸುತ್ತಾರೆ.

ಹೀಗಾಗಿ, ಸಿದ್ಧಾಂತಗಳ ಹಿಂದಿನ ತತ್ವಗಳು ಭೌತಿಕ ಸಾಮಗ್ರಿಗಳನ್ನು ಅಗತ್ಯ ಎಂದು ಪರಿಗಣಿಸಿ ಶಿಫಾರಸ್ಸು ಮಾಡುವುದಿಲ್ಲ. ಆದರೆ ಅವರು ಸೂಚಿಸುವ ವಿಷಯವೆಂದರೆ ಆಲೋಚನೆಗಳು ಮತ್ತು ಪರಿಕಲ್ಪನೆಗಳು ಸಂದರ್ಭದೊಂದಿಗೆ ಹೊಂದಿಕೊಂಡು ಕಲಿಯುವವರಿಗೆ ಮೂರ್ಗವಾಗಿರಬೇಕು. ಹೊಸ ಪರಿಕಲ್ಪನೆಯ ಚೌಕಟ್ಟಿನ ಅಡಿಯಲ್ಲಿ ಈ ಕಲಿಕಾ ಅನುಭವಗಳನ್ನು ಸಂಘಟಿಸಿದಾಗ ಅವು ಕಲಿಕೆಯೊಂದಿಗೆ ಅವರು ಈ ಮೊದಲು ಹೊಂದಿದ್ದ ಅನುಭವಗಳನ್ನು ಒಳಗೊಂಡಿರಬಹುದು. ಅದರರ್ಥ ಭೌತಿಕ ಸಾಮಗ್ರಿಗಳು ಮತ್ತು ವಸ್ತುಗಳು ಕಲಿಕೆಯ ಸಾಧ್ಯತೆಗಳನ್ನು ವ್ಯಾಖ್ಯಾನಿಸುತ್ತವೆ ಎಂದಲ್ಲ. ಪಿಯಾಜೆ, ವೈಗೋಟ್ಸ್ಕಿ ಅಥವಾ ಬ್ರೂನರ್ ಎಲ್ಲರ ಸಂದೇಶದ ಸಾರವೆಂದರೆ ಮಗು ಕಲಿಕೆಯ

ಪ್ರಕ್ರಿಯೆಯಲ್ಲಿ ಸಕ್ರಿಯವಾಗಿರಬೇಕು, ಆದರೆ ಅದೇ ಸಮಯದಲ್ಲಿ ಕಲಿಯುವವರು ವಸ್ತುಗಳನ್ನು ಸಂಘಟಿಸಲು, ಜೋಡಿಸಲು ತಮ್ಮ ಬುದ್ಧಿಯನ್ನು ಅನ್ವಯಿಸಬೇಕು, ಅದರೊಂದಿಗಿನ ಅವರ ಅನುಭವಗಳು ಮತ್ತು ಅವರ ಹಿಂದಿನ ಜ್ಞಾನ ವ್ಯವಸ್ಥೆಯ ಆಧಾರದ ಮೇಲೆ ಪ್ರಸ್ತುತ ಅವರ ಭಾಗವಹಿಸುವಿಕೆಯ ಕುರಿತು ಅವರೇ ಅವಲೋಕನವನ್ನು ಮಾಡಬೇಕು ಎಂದು ನಿರೀಕ್ಷಿಸಲಾಗುತ್ತದೆ. ವೈಗೋಟ್ಸ್ಕಿ ಪ್ರಕಾರ ಇದು ಸಾಮಾಜಿಕ ಒಡನಾಟದ ಜೊತೆಗೆ ಸಂಭವಿಸುತ್ತದೆ.

ಸಾಮಗ್ರಿಗಳನ್ನು ರಚಿಸಲು ಅಥವಾ ಆಯ್ಕೆ ಮಾಡುವಾಗ ಮತ್ತು ತರಗತಿಗಳಲ್ಲಿ ಅವುಗಳನ್ನು ಬಳಸುವ ವಿಧಾನಗಳನ್ನು ರೂಪಿಸುವಾಗ ಈ ಅಂಶಗಳು ನಿರ್ಣಾಯಕವಾಗಿವೆ. ಮಕ್ಕಳು ತಮ್ಮಲ್ಲಿರುವ ಸಾಮರ್ಥ್ಯದ ಎಲ್ಲಾ ಅಂಶಗಳನ್ನು ಬಳಸಲು ಅವಕಾಶಗಳನ್ನು ಪಡೆಯಲು ಮತ್ತು ಅವರು ಪ್ರಪಂಚದ ಬಗ್ಗೆ ತಾವು ರೂಪಿಸಿಕೊಂಡ ಜ್ಞಾನವನ್ನು ಪುನರ್ನಿರ್ಮಿಸಲು ಅಥವಾ ಮಾರ್ಪಡಿಸಲು ಅವರಿಗೆ ಲಭ್ಯವಿರುವ ಭಾಷೆಯನ್ನು ಬಳಸಿ ಕಲಿಕೆಯ ಪ್ರಕ್ರಿಯೆಯನ್ನು ಮಾರ್ಗದರ್ಶನ ಮಾಡಲು ಒತ್ತು ನೀಡಬೇಕು. ಬಹುತೇಕ ಎಲ್ಲಾ ಗಂಭೀರ ಶಿಕ್ಷಣತಜ್ಞರು ತಮ್ಮ ಕೆಲಸದಲ್ಲಿ ಕಲಿಕಾ ಅನುಭವಗಳ ಮೂರ್ತತೆಯನ್ನು ಒತ್ತಿ ಹೇಳಿದ್ದಾರೆ, ಅದೇ ಸಂದರ್ಭದಲ್ಲಿ ಸಾಕಷ್ಟು ಸಂವಾದ ಮತ್ತು ಚರ್ಚೆಯೊಂದಿಗೆ ಸಹಕಾರಿ ಮತ್ತು ಸಂಯೋಜಕ ಕಾರ್ಯಗಳಿಗೆ ಒತ್ತು ನೀಡಿದ್ದಾರೆ. ಡ್ಯೂಯಿಯ ವಿಚಾರಗಳಲ್ಲಿ ಅಂತರ್ಗತವಾಗಿರುವ ಸಾಮಗ್ರಿಗಳ ಅರ್ಥ ಮತ್ತು ಕಲಿಕೆಯ ಸನ್ನಿವೇಶಗಳು, ನಯೀ ತಾಲಿಮ್ನಲ್ಲಿಯೂ ಪ್ರತಿಫಲಿಸುತ್ತವೆ. ಅನೇಕ ಇತರ ಶಿಕ್ಷಣತಜ್ಞರು ಭೌತಿಕ ವಸ್ತುಗಳ ಬದಲಿಗೆ ಮೂರ್ತ ಅನುಭವದಲ್ಲಿ ತೊಡಗಿಕೊಳ್ಳುವಿಕೆಯನ್ನು ಮತ್ತು ಉದ್ದೇಶವನ್ನು ಶಿಫಾರಸ್ಸು ಮಾಡುತ್ತಾರೆ. ಕಲಿಕೆಯ ಕಾರ್ಯಗಳು ಮಕ್ಕಳ ಅನುಭವಗಳು, ಭಾಷೆ ಮತ್ತು ಪರಿಸರದಲ್ಲಿ ಅಂತರ್ಗತವಾಗಿರಬೇಕು ಮತ್ತು ಸಮುದಾಯಕ್ಕೂ ಉಪಯುಕ್ತವಾಗಿರಬೇಕು. ಸಮುದಾಯಕ್ಕೆ ಉಪಯುಕ್ತವಾದ ಕಲಿಕೆ ಕೆಲಸದ ಸಂಪರ್ಕ, ಸಂವಹನ ಮತ್ತು ಹಂಚಿಕೆಯನ್ನು ಸುಗಮಗೊಳಿಸಲೂ ಮುಖ್ಯ ಎಂದು ಪರಿಗಣಿಸಲಾಗುತ್ತದೆ. ಪ್ರಸ್ತುತ ಸಂದರ್ಭದಲ್ಲಿ ಸಾಮಗ್ರಿಗಳ ಬಳಕೆಯಲ್ಲಿ, ಅವುಗಳ ಸುತ್ತಲಿನ ಸಂವಾದ ಮತ್ತು ಇತ್ತೀಚಿನ ದಶಕಗಳಲ್ಲಿ ಇದರ ಕಲ್ಪನೆಯು ಹೇಗೆ ಬೆಳೆದಿದೆ ಎಂಬುದನ್ನು ನಾವು ಈಗ ಸಂಕ್ಷಿಪ್ತವಾಗಿ ಪರಿಶೀಲಿಸುತ್ತೇವೆ.

**ಸಾಮಗ್ರಿಗಳನ್ನು ಸಹಾಯಕ ಸಾಧನಗಳಾಗಿ ಬಳಸುವುದು**

ಮಾಹಿತಿ ನೀಡುವುದನ್ನು ಪ್ರಾಥಮಿಕ ಉದ್ದೇಶ ಎಂದು ಒತ್ತಿ ಹೇಳುವ ಬೋಧನಾ ಪ್ರಕ್ರಿಯೆಗೆ ಸಹಾಯಕವಾಗಿ ಸಾಮಗ್ರಿಗಳನ್ನು ಬಳಸಲು ಪ್ರಾರಂಭಿಸಲಾಯಿತು. ಮುಖ್ಯವೆಂದು ಪರಿಗಣಿಸಲಾದ ಮಾಹಿತಿಯನ್ನು ಉರುಹೊಡೆಯುವುದಕ್ಕೆ, ಕಾರ್ಯಗಳ ಪುನರಾರ್ತನೆಗೆ ಸಹಾಯ ಮಾಡಲು ಮಾತ್ರ ಸಾಮಗ್ರಿಗಳನ್ನು ಬಳಸಲಾಗುತ್ತಿತ್ತು. ಲಭ್ಯವಿರುವ ವಿವರಣೆಗಳನ್ನು ಉರುಹೊಡೆಯುವುದು, ವಿವರಣೆಗಳು ಮತ್ತು ವಾದಗಳನ್ನು ಮಾಡುವ ಸಾಮರ್ಥ್ಯವನ್ನು ಸಹ ಇದು ಪಡೆದುಕೊಳ್ಳುತ್ತದೆ. ಪಠ್ಯಕ್ರಮದ ನಿರೀಕ್ಷೆಗಳು ಪುನರಾವರ್ತನೆಗೆ ಸೀಮಿತವಾಗಿದ್ದವು ಮತ್ತು ಪುನರುತ್ಪಾದನೆ ಮಾತ್ರ ಕಡ್ಡಾಯವಾಗಿತ್ತು. ಜ್ಞಾನದ ಯಾವುದೇ ಅನ್ವಯಿಸುವಿಕೆಯನ್ನು ಕೇಳಲಾಗಿರಲಿಲ್ಲ ಅಥವಾ ನಿರೀಕ್ಷಿಸಲಾಗಿರಲಿಲ್ಲ.

ಆದರೂ, ಇದನ್ನು ಇನ್ನಷ್ಟು ಉತ್ತಮವಾಗಿ ಮಾಡಲು, ಶಿಕ್ಷಕರನ್ನು ಬರಹ ಮತ್ತು ಮಾತನ್ನು (chalk and talk) ಮೀರಿ ಹೋಗಲು ಒತ್ತಾಯಿಸಿದರು. ಮಾಹಿತಿಯು ಹೆಚ್ಚು ಗಮನರ್ಹವಾಗುವಂತೆ ಪ್ರಸ್ತುತ ಪಡಿಸಬೇಕಾಗಿತ್ತು ಇದರಿಂದಾಗಿ ಅದನ್ನು ಹೆಚ್ಚು ನೆನಪಿಟ್ಟುಕೊಳ್ಳಲು ಸಹಕಾರಿಯಾಯಿತು. ಆದ್ದರಿಂದ ಸಾಮಗ್ರಿಗಳ ಆರಂಭಿಕ ಬಳಕೆಯು, ಮಾಹಿತಿಯ ರ್‍ವಾನಣೆಗೆ ಸಹಾಯ ಮಾಡುವ ಮತ್ತು ಅದನ್ನು ಹೆಚ್ಚು ಪರಿಣಾಮಕಾರಿಯಾಗಿ

ಮಾಡುವ ಸಾಧನವಾಗಿತ್ತು. ಚಾರ್ಟ್‌ಗಳು, ಥರ್ಮಾಕೋಲ್, ಸ್ಲೈಡ್‌ಗಳು ಇತ್ಯಾದಿಗಳನ್ನು ಬಳಸಿ ಮಾಡಿದ ಸಾದೃಶ್ಯ ಬೋಧನಾ ಸಾಧನಗಳು ಮಾದರಿಗಳನ್ನು ಪ್ರಸ್ತುತಪಡಿಸಿದವು ಮತ್ತು ಸಂಪೂರ್ಣ ಮಾಹಿತಿಯನ್ನು ವಿವಿಧ ಭಾಗಗಳಲ್ಲಿ ವಿಂಗಡಿಸಿ ತೋರಿಸಿದವು. ಇದು ಮಾಹಿತಿಯನ್ನು ಸರಳೀಕರಿಸಲು ಮತ್ತು ನಿಧಾನವಾಗಿ ಮತ್ತು ಸ್ಪಷ್ಟವಾಗಿ ಪ್ರಸ್ತುತಪಡಿಸಲು ಉದ್ದೇಶಿಸಿತ್ತು. ಹೀಗಾಗಿ ಇದರಿಂದ ಕಲಿಯುವವರು ಅದನ್ನು ಸ್ವಲ್ಪ ಸ್ವಲ್ಪವೇ ಗ್ರಹಿಸಬಹುದಾಗಿತ್ತು. ಇದು ಮಕ್ಕಳು ಬಯಸಿದ ಮಾಹಿತಿಯನ್ನು ಪಡೆಯಲು ಮತ್ತು ಪುನರುತ್ಪಾದಿಸಲು ಅಗತ್ಯವಿರುವ ಮಾನಸಿಕ ಪ್ರಯತ್ನವನ್ನು ಕಡಿಮೆ ಮಾಡುತ್ತದೆ ಮತ್ತು ನವೀನತೆ ಮತ್ತು ಉತ್ಸಾಹದ ಅಂಶವನ್ನು ಸೇರಿಸುತ್ತದೆ ಎಂದು ಭಾವಿಸಲಾಗಿತ್ತು. ಆದ್ದರಿಂದ ಸಾಮಗ್ರಿಗಳನ್ನು ನುಂಗಲು ಕಹಿಯಾದ ಮಾತ್ರೆಗಳ ಮೇಲಿನ ಸಕ್ಕರೆಯ ಲೇಪನವೆಂಬಂತೆ ನೋಡಲಾಯಿತು.

ಆದ್ದರಿಂದ ಬೋಧನಾ ಕಲಿಕಾ ಸಾಮಗ್ರಿಗಳ ಮೊದಲ ವಿನ್ಯಾಸ ಬೋಧನಾ ಸಾಧನವಾಗಿತ್ತು. ಮಕ್ಕಳ ಗಮನ ಇವುಗಳತ್ತ ಹರಿಯುವಂತೆ ಮಾಡಿ ಮಕ್ಕಳಿಗೆ ಕಲಿಸಬೇಕಾದ್ದನ್ನು ಆಕರ್ಷಕ ರೀತಿಯಲ್ಲಿ ತೋರಿಸುತ್ತಿದ್ದರು. ಇದರ ಉದ್ದೇಶವು ಅವರನ್ನು ಮಾನಸಿಕವಾಗಿ ಕಲಿಕೆಯಲ್ಲಿ ತೊಡಗಿಕೊಳ್ಳುವಂತೆ ಮಾಡುವುದಾಗಲಿ ಅಥವಾ ಅವರ ಕುತೂಹಲವನ್ನು ಕೆರಳಿಸುವುದಾಗಲಿ ಮತ್ತು ಪ್ರಸ್ತುತಪಡಿಸಿದ ವಸ್ತುಗಳು ಅಥವಾ ಅವುಗಳ ಅನುಭವಗಳ ಮೇಲೆ ಕೇಂದ್ರೀಕರಿಸಲು ಅನುವು ಮಾಡಿಕೊಡುವುದಾಗಲಿ ಆಗಿರಲಿಲ್ಲ. ಬದಲಿಗೆ ಅದನ್ನು ನೆನಪಿನಲ್ಲಿಟ್ಟುಕೊಳ್ಳಲು ಸಾಧನವಾಗಿ ಅಥವಾ ಆಸಕ್ತಿದಾಯಕವಾಗಿಸಲು ಮತ್ತು ಗಮನ ಬೇರೆಡೆಗೆ ಹರಿಯದಂತೆ ಮಾಡುವುದಾಗಿತ್ತು. ಬೋಧನಾ ಸಾಧನಗಳನ್ನು ಬಳಸುವ ಚಟುವಟಿಕೆಗಳು ಪೋಸ್ಟರ್‌ಗಳು, ಸ್ಲೈಡ್ ಶೋಗಳು, ವಿವಿಧ ರೀತಿಯ ವಸ್ತುಗಳಿಂದ ಮಾಡಿದ ಮಾದರಿಗಳು, ಶಿಕ್ಷಕರು ಖರೀದಿಸಿದ ಅಥವಾ ತಯಾರಿಸಿದ ಮಾದರಿಗಳಿಗೆ ಕಾರಣವಾಯಿತು. ಯಾವ ಜ್ಞಾನವನ್ನು ಪಡೆದುಕೊಳ್ಳಬೇಕು, ಮಾನವರು ಹೇಗೆ ಕಲಿಯುತ್ತಾರೆ ಮತ್ತು ಕಲಿಯುವುದು ಎಂದರೆ ಏನು ಎಂಬುದರ ಕುರಿತು ಆ ಸಮಯದಲ್ಲಿ ಪ್ರಚಲಿತದಲ್ಲಿದ್ದ ವಿಚಾರಗಳೊಂದಿಗೆ ಇವುಗಳನ್ನು ಜೋಡಿಸಲಾಯಿತು.

ಇಂದು ಬಹುಶಃ ವಿಭಿನ್ನ ರೀತಿಯ ಮಾನವ ಕಲಿಕಾ ಪರಿಕಲ್ಪನೆಗಳೊಂದಿಗೆ ನಾವು ಬೋಧನಾ ಸಾಧನಗಳ ಕಲ್ಪನೆಗಳನ್ನು ಪ್ರಾತ್ಯಕ್ಷಿಕ ಪ್ರಯೋಗಗಳಾಗಿ ಬದಲಾಯಿಸಿರುವುದನ್ನು ನೋಡಬಹುದು, ವೀಡಿಯೊಗಳು ವಾಡಿಕೆಯಂತೆ ಕಲ್ಪನೆಗಳನ್ನು ವಿವರಿಸುತ್ತಿರುತ್ತವೆ ಅಥವಾ ಮಾಹಿತಿಯನ್ನು ನೀಡುತ್ತಿರುತ್ತವೆ. ಅವೂ ಅದೇ ಉದ್ದೇಶವನ್ನು ಹೊಂದಿವೆ ಮತ್ತು ಏಳು ದಶಕಗಳ ಹಿಂದೆ ಕಲಿಕಾ ಸಾಮಗ್ರಿಗಳು ಅನುಸರಿಸಿದ ಅದೇ ಶಿಕ್ಷಣಶಾಸ್ತ್ರ ತತ್ತ್ವಗಳನ್ನು ಅನುಸರಿಸುತ್ತವೆ.

## ಸಕ್ರಿಯ ಸಾಮಗ್ರಿಗಳು

ಬೋಧನಾ ಸಾಧನಗಳು ಮಗುವನ್ನು ಕ್ರಿಯಾಶೀಲವಾಗಿಸುವಲ್ಲಿ ವಿಫಲವಾದ ಕಾರಣ ಅವುಗಳನ್ನು ಟೀಕಿಸಲಾಯಿತು. ಮಗು ತಾನೇ ಸ್ವಂತವಾಗಿ ಕಲಿಕೆಯಲ್ಲಿ ಸಕ್ರಿಯವಾಗಿ ತೊಡಗಿಸಿಕೊಳ್ಳುವುದು ತರಗತಿಯ ಉದ್ದೇಶವಾಗಿದೆ ಎಂಬ ವಾದವನ್ನು ಮಂಡಿಸಲಾಯಿತು. ಇದು ಸಾಮಗ್ರಿಗಳು ಮಕ್ಕಳ ಕೈಗೆ ಹೋಗಬೇಕು ಎಂದು ಸೂಚಿಸುತ್ತದೆ. ಇದಕ್ಕಾಗಿ, ಫ್ಲ್ಯಾಷ್ ಕಾರ್ಡ್‌ಗಳು, ವಿಜ್ಞಾನ ಕಿಟ್ ಸಾಮಗ್ರಿಗಳು, ಕಟ್-ಔಟ್‌ಗಳು, ಪಾಕೆಟ್ ಬೋರ್ಡ್‌ಗಳು/ಚಿಕ್ಕ ಬೋರ್ಡ್‌ಗಳು, ಮಣಿಗಳು ಮತ್ತು ತಂತಿಗಳು, ರೇಖಾಗಣಿತದ ವಿವಿಧ ಆಕಾರಗಳು ಮತ್ತು ಇತರ ರೀತಿಯ ವಿಷಯಗಳಿಗೆ ಒತ್ತು ನೀಡಲಾಯಿತು. ಸರ್ಕಾರ ಮತ್ತು ಸರ್ಕಾರೇತರ ಸಂಸ್ಥೆಗಳ ಪ್ರಯತ್ನದಿಂದಾಗಿ, ವಿಜ್ಞಾನ ಶಿಕ್ಷಣಕ್ಕೆ ಪ್ರಯೋಗಗಳು ಮುಖ್ಯವೆಂದು ಸಾಧಿಸಲು ಸಾಧ್ಯವಾಯಿತು. ಈ ವಸ್ತುಗಳಿಗೆ ಚಾಲನೆ ನೀಡುವ ಉದ್ದೇಶಗಳು ಮತ್ತು ಶಿಕ್ಷಣ ತತ್ವಗಳು

ಮಿಶ್ರಣವಾಗಿವೆ: ಒಂದೇ ರೀತಿಯ ವಸ್ತುಗಳನ್ನು ಪ್ರಸ್ತುತಪಡಿಸಲಾಯಿತು. ಆದರೆ ಇದು ವಿಭಿನ್ನ ಗುಂಪುಗಳಿಂದ ವಿಭಿನ್ನವಾಗಿ ಬಳಸಲ್ಪಟ್ಟಿದೆ.

1986 ರ ಹೊತ್ತಿಗೆ ರಾಷ್ಟ್ರೀಯ ಶಿಕ್ಷಣ ನೀತಿಯು ಕೂಡಾ (NEP 1986) ಪ್ರಾಥಮಿಕ ತರಗತಿಗಳಲ್ಲಿ ಸಾಮಗ್ರಿಗಳ ಬಳಕೆಗೆ ಒತ್ತು ನೀಡಿತು ಮತ್ತು ಈ ಸಾಮಗ್ರಿಗಳು ಯಾವುದಾಗಿರಬಹುದು ಎಂಬುದರ ಸೂಚನೆಯನ್ನು ನೀಡಿತು. ನಂತರದಲ್ಲಿ ಆ ವರ್ಷಗಳಲ್ಲಿ ಶಾಲೆಗಳಿಗೆ ವಿಜ್ಞಾನದ ಕಿಟ್‌ಗಳು ಮತ್ತು ಸಾಮಗ್ರಿಗಳನ್ನು ಸರಬರಾಜು ಮಾಡುವ ಪ್ರಯತ್ನವನ್ನು ಮಾಡಲಾಯಿತು, ಆದರೆ ಅವು ಬಹುತೇಕ ಬಳಕೆಯಾಗದೆ ಉಳಿದವು. ಸರಬರಾಜು ಮಾಡಿದ ವಸ್ತುಗಳ ಗುಣಮಟ್ಟ, ದುರಸ್ತಿ ಮಾಡುವ ನಿಯಮಗಳ ಸ್ವರೂಪ ಮತ್ತು ಇವುಗಳಿಂದ ಉಂಟಾಗುವ ತೊಂದರೆಗಳು ಇತ್ಯಾದಿಗಳು ಮಾತ್ರವೇ ಈ ಸಾಮಗ್ರಿಗಳ ಯಾವುದೇ ಗಮನಾರ್ಹ ಬಳಕೆ ಆಗದೇ ಇರುವುದಕ್ಕೆ ಕಾರಣಗಳಲ್ಲ. ಆದರೂ, ಸಾಮಗ್ರಿಗಳ ಕುರಿತಾದ ಚರ್ಚೆಯು ಉನ್ನತ ಪ್ರಾಥಮಿಕ ಮತ್ತು ಮಾಧ್ಯಮಿಕ ತರಗತಿಗಳಿಗೂ ವಿಸ್ತರಿಸಿತು; ಸಾಮಗ್ರಿಗಳ ಉಪಸ್ಥಿತಿಯು ನಿಮ್ಮನ್ನು ವಿಭಿನ್ನವಾಗಿ ತೋರಿಸಲು ಅನುಕೂಲಕರ ಮಾರ್ಗವಾಗಿದೆ. ಮಕ್ಕಳಿಗೆ ಏಕತಾನತೆಯನ್ನು ನಿವಾರಿಸುವವುಗಳಾಗಿ, ಏಕಾಗ್ರತೆಗೆ ಭಂಗ ತರುವ ವಿಚಲನಗಳಾಗಿಯೂ ಅವು ಕಂಡುಬಂದವು. ಚಟುವಟಿಕೆಯ ಕೊಠಡಿಗಳು, ಭಾಷೆ ಅಥವಾ ಗಣಿತ ಪ್ರಯೋಗಾಲಯಗಳು, ಸ್ಮಾರ್ಟ್ ತರಗತಿಗಳು, ಸಂವಾದಾತ್ಮಕ ಆನ್ಲೈನ್ ಕಲಿಕೆ ಮತ್ತು ಇಂತಹ ವಿಷಯಗಳು ಸಾಮಾನ್ಯ ರೂಢಿಗಳಾದವು. ಇವೆಲ್ಲವೂ ನಿಧಾನವಾಗಿ ಖಾಸಗಿ ಶಾಲೆಗಳಲ್ಲಿ 'ಅತ್ಯಾಧುನಿಕ ವಸ್ತುಗಳ' ಸ್ಪರ್ಧೆಗೆ ಕಾರಣವಾದವು ಹಾಗೂ ಬಹು ವಿಧದ ವಸ್ತುಗಳಿಗೆ ದೊಡ್ಡ ಮಾರುಕಟ್ಟೆಯನ್ನು ಸೃಷ್ಟಿಸಿತು ಮತ್ತು ಇದು ಬೆಳೆಯುತ್ತಿದೆ ಕೂಡಾ.

ಇತ್ತೀಚಿನ ದಿನಗಳಲ್ಲಿ, ಹೆಚ್ಚಿನ ಹೂಡಿಕೆಯೊಂದಿಗೆ ಕಲಿಕೆಯಲ್ಲಿ ಐಸಿಟಿ(ICT)ಗೆ ಒತ್ತು ನೀಡಲಾಗಿದೆ. ವಿಭಿನ್ನ ಆಕಾರಗಳು ಮತ್ತು ವಸ್ತುಗಳನ್ನು ದೃಶ್ಯೀಕರಿಸಲು ಕಲಿಯುವ ಸಾಧನವಾಗಿ ಅಥವಾ ಸಂಪೂರ್ಣ ಭಾಗಗಳನ್ನು ಚಿತ್ರಿಸುವ ಸಾಧನವಾಗಿ ನಾವು ಭೌತಿಕ ವಸ್ತುಗಳಾದ ಕಾಗದ ಮಡಚುವಿಕೆ (ಪೇಪರ್ ಫೋಲ್ಡಿಂಗ್), ಫ್ಲ್ಯಾಷ್ ಕಾರ್ಡ್‌ಗಳು, ಪೋಸ್ಟರ್‌ಗಳು, ಚಾರ್ಟ್‌ಗಳು ಇತ್ಯಾದಿಗಳನ್ನು ಬಳಸುವುದರಿಂದ ದೂರ ಸರಿದಿದ್ದೇವೆ. ಅನುಭವಗಳ ಆಧಾರದ ಮೇಲೆ ಸ್ವಾಭಾವಿಕ ಸಂಖ್ಯಾ ವ್ಯವಸ್ಥೆಯ ಮಾದರಿಯನ್ನು ಗುರುತಿಸಲು ಬಳಸುತ್ತಿದ್ದ ಮಣಿಗಳು ಮತ್ತು ತಂತಿಗಳ ಬದಲಿಗೆ ಇತರ ನೂತನ ಮಾದರಿಗಳು ಮತ್ತು ಭಿನ್ನರಾಶಿಯ ಸಂಖ್ಯೆಗಳನ್ನು ಗುರುತಿಸಲು ಬಳಸುತ್ತಿದ್ದ ಚಿತ್ರಗಳು ಮತ್ತು ಕಾರ್ಡ್‌ಗಳ ಬದಲಿಗೆ ಡೈನೆಸ್ ಬ್ಲಾಕ್‌ಗಳು ಮತ್ತು ಇತರೆ ವಿಶೇಷವಾಗಿ ನಿರ್ಮಿಸಿದ ವಸ್ತುಗಳಿಗೆ ಬದಲಾಗಿದ್ದೇವೆ. ವಿದ್ಯಾರ್ಥಿಗಳು ಮತ್ತು ಶಿಕ್ಷಕರಿಗೆ ಪೂರ್ವ-ವಿನ್ಯಾಸಗೊಳಿಸಿದ ಪ್ರಯೋಗಗಳು, ಕಾರ್ಯನಿರ್ವಹಣಾ ಮಾದರಿಗಳು ಮತ್ತು ಪ್ರಾಜೆಕ್ಟ್‌ಗಳಿಗೆ ಕಿಟ್‌ಗಳಿವೆ. ಮಕ್ಕಳಿಗಾಗಿ ಬಳಸಲು ಈಗಾಗಲೇ ನಿರ್ಮಿಸಿದ ವಸ್ತುಗಳು, ಕಾರ್ಯಗಳು/ಕೆಲಸಗಳು ಮತ್ತು ಸಂವಹನದ ರಚನೆಗಳು, ಹೆಚ್ಚು ಪ್ರಾಮುಖ್ಯತೆಯನ್ನು ಪಡೆದಿವೆ. ಸಹಾಯಕ ಸಾಧನಗಳು ಮತ್ತು ಸಾಮಗ್ರಿಗಳೊಂದಿಗೆ 'ಉತ್ತಮವಾಗಿ ರೂಪುಗೊಂಡ' ಪಾಠ ಯೋಜನೆಗಳು, ಮಾರುಕಟ್ಟೆಯಲ್ಲಿ ಅಳವಡಿಸಿಕೊಳ್ಳಬಹುದಾದ (ಇನ್‌ಸ್ಟಾಲ್) ಪ್ಯಾಕೇಜ್‌ಗಳೊಂದಿಗೆ ಲಭ್ಯವಿರುವ ಸ್ಮಾರ್ಟ್ ತರಗತಿಗಳು ಶಿಕ್ಷಕರ ಜವಾಬ್ದಾರಿಗಳನ್ನು ಅಂಗಡಿಯಾತನಿಗೆ ವರ್ಗಾಯಿಸಿವೆ.

ಸಾಮಗ್ರಿಗಳ ಬಗ್ಗೆ ಯೋಚಿಸುವುದರಲ್ಲಿ ಮತ್ತು ಅವುಗಳಲ್ಲಿ ಹೆಚ್ಚಿನ 'ದಕ್ಷತೆ' ಕಂಡುಕೊಳ್ಳಲು ಮತ್ತು ಊಹಿಸಬಹುದಾದಂತೆ ಮಾಡುವಲ್ಲಿ ಈಗ ಸಾಕಷ್ಟು ಪ್ರಗತಿಯಾಗಿದೆ ಎಂಬುದರಲ್ಲಿ ಸಂದೇಹವಿಲ್ಲ ಮತ್ತು ಸಾಮಗ್ರಿಗಳು ಉಪಯುಕ್ತವಾಗಬಹುದು ಮತ್ತು ನಾವು ಅವುಗಳನ್ನು ತರಗತಿಯಲ್ಲಿ ಹೊಂದಿರಲೇಬೇಕು ಎಂಬುದರಲ್ಲಿಯೂ ಯಾವುದೇ ಸಂದೇಹವಿಲ್ಲ. ಇದರ ಹೊರತಾಗಿಯೂ, ವಸ್ತುಗಳ ಬಳಕೆಯ ವಿಧಾನವು ತರಗತಿಯ ವಿನಿಮಯ ಪ್ರಕ್ರಿಯೆಗಳಲ್ಲಿ ಸುಧಾರಣೆಗೆ ಕಾರಣವಾಗುತ್ತದೆಯೇ ಎಂದು ಕೇಳಬೇಕಾಗಿದೆ

ಮತ್ತು ಅದು ಸಾಧ್ಯವಾಗದಿದ್ದರೆ, ನಮ್ಮ ವಿಧಾನ ಮತ್ತು ವಸ್ತುಗಳ ಕುರಿತ ತಿಳಿವಳಿಕೆ ಮತ್ತು ಮೂರ್ತ ಕಲಿಕಾ ಸಂದರ್ಭಗಳಲ್ಲಿ ಮೂಲಭೂತವಾಗಿ ಏನಾದರೂ ತಪ್ಪಾಗಿದೆಯೇ?

ಕಲಿಕೆಗೆ ಸಹಾಯ ಮಾಡುವ ಸಾಧನಗಳ/ಸಾಮಗ್ರಿಗಳ ಪರಿಕಲ್ಪನೆಯು ಮಕ್ಕಳನ್ನು ತೊಡಗಿಸಿಕೊಳ್ಳುವಂತೆ ಮಾಡುವ ಕರ್ಯಗಳನ್ನು ಅಭಿವೃದ್ಧಿಪಡಿಸುವ ಅಗತ್ಯದಿಂದ ಹೊರಹೊಮ್ಮುತ್ತದೆ, ಅವರು ತೊಡಗಿಸಿಕೊಳ್ಳಲು ಸಹಾಯ ಮಾಡುವ ಕಾರ್ಯಗಳು ಪರಿಕಲ್ಪನೆಗಳು ಮತ್ತು ತಾರ್ಕಿಕ ರಚನೆಗಳನ್ನು ಸಹಪಾಠಿಗಳು ಮತ್ತು ಶಿಕ್ಷಕರೊಂದಿಗೆ ಸಂವಾದದಲ್ಲಿ ತೊಡಗಿಸುವುದರ ಮೂಲಕ ರಚಿಸಬಹುದು. ಇದು ಅವರು ಒಟ್ಟಿಗೆ ಕಲಿಯುವ ಮತ್ತು ಹೊಸ ಜ್ಞಾನವಲ್ಲದಿದ್ದರೂ, ಅವರು ಈವರೆಗೂ ಕಲಿತು ಬಂದ ರೀತಿಯಲ್ಲಿ ಹೊಸದು ಮತ್ತು ಅವರಿಗೆ ಹೊಸದು ಎಂಬ ಒಳನೋಟಗಳನ್ನು ಅಭಿವೃದ್ಧಿಪಡಿಸುವ ಸಂದರ್ಭಗಳನ್ನು ಸುಗಮಗೊಳಿಸುವ ಅಗತ್ಯವಿರುತ್ತದೆ. ನವೀನತೆ ಮತ್ತು ಸಂತೋಷವು ವಸ್ತುಗಳಲ್ಲಿಲ್ಲ ಆದರೆ ಅದರಲ್ಲಿ ತೊಡಗಿಕೊಳ್ಳುವಿಕೆಯಲ್ಲಿಯೂ ವಸ್ತುಗಳನ್ನು ಬಳಸುವ ಸುತ್ತಲಿನ ಪರಸ್ಪರಾನುಕ್ರಿಯೆಯಲ್ಲಿ ಕಲಿಕೆಯ ಪ್ರಕ್ರಿಯೆಯು ನೇರವಾಗಿದೆ ಮತ್ತು ಮಾಹಿತಿಯ ಚೂರುಗಳ ನಿಧಾನ ವರ್ಗಾವಣೆಗೆ ಕಾರಣವಾಗುತ್ತದೆ ಎಂದು ಭಾವಿಸಲಾಗುವುದಿಲ್ಲ, ಆದರೆ ಪರಿಕಲ್ಪನೆಗಳ ಸಾಮೂಹಿಕ ಮರು-ನಿರ್ಮಾಣ ಪ್ರಕ್ರಿಯೆ, ಸಾಮೂಹಿಕವಾಗಿ ಪ್ರತಿ ಮಗುವು ಈಗಾಗಲೇ ಹೊಂದಿರುವ ರಚನೆಗಳ ಆಧಾರದ ಮೇಲೆ ನಿರ್ದಿಷ್ಟ ರೀತಿಯಲ್ಲಿ ಗ್ರಹಿಸಲ್ಪಡುತ್ತದೆ.

ಸಾಮಗ್ರಿಗಳ ಉದ್ದೇಶವು ಚಟುವಟಿಕೆಯಲ್ಲ; ಆದರೆ ಮನಸ್ಸುಗಳನ್ನು ಕ್ರಿಯಾಶೀಲವಾಗಿಸುವುದು ಮತ್ತು ಕ್ರಿಯಾಶೀಲ ಮನಸ್ಸುಗಳ ನಡುವೆ ಪರಸ್ಪರಾನುಕ್ರಿಯೆಯನ್ನು ಸಾಧ್ಯವಾಗಿಸುವುದು. ತಾತ್ಕಾಲಿಕ ಮಾದರಿಗಳು, ಮೂರ್ತ ದೃಷ್ಟಾಂತಗಳು, ಪರಿಕಲ್ಪನೆಗಳೊಂದಿಗೆ ತೊಡಗಿಸಿಕೊಳ್ಳಲು ಸಾಧ್ಯವಾಗುವಂತೆ ಅವುಗಳನ್ನು ವಿವರಿಸಲು, ಪರಿಕಲ್ಪನೆಗಳನ್ನು ಬಳಸಲು ಮತ್ತು ವಿಸ್ತರಿಸಲು ಮಗುವಿಗೆ ಸಹಾಯ ಮಾಡುವ ಉದ್ದೇಶವು ಅನುಭವದ ನೆಲೆ ಮತ್ತು ಕಲಿಕೆಯ ವ್ಯಾಪ್ತಿಯನ್ನು ವಿಸ್ತರಿಸಲು ಉದ್ದೇಶಿಸಿದೆ. ತಾರ್ಕಿಕ ಸೂತ್ರೀಕರಣಗಳನ್ನು ಸುಸಂಬದ್ಧವಾಗಿ ನಿರ್ಮಿಸುವ ಮಗುವಿನ ಸಾಮರ್ಥ್ಯಗಳನ್ನು, ಹೀಗೆ ಹೆಚ್ಚು ತೀಕ್ಷ್ಣವಾಗಿ ಗಮನಿಸಲಾಗುತ್ತದೆ ಮತ್ತು ವಿವರಿಸಲಾಗುತ್ತದೆ. ಇದರ ಪ್ರಮುಖ ಉದ್ದೇಶ ಏನನ್ನೂ ಸರಳಗೊಳಿಸುವುದು ಅಥವಾ ವಿನೋದವನ್ನು ಒದಗಿಸುವುದು ಅಲ್ಲ. ಸಂದರ್ಭೋಚಿತವಾಗಿರುವಂತೆ, ಉದ್ದೇಶ ಮತ್ತು ಕಾರ್ಯ ಎರಡನ್ನೂ ಸಾಧಿಸುವಂತೆ ಮಾಡಲು ಮಕ್ಕಳ ಸಹಕಾರದ ಒಳಹರಿವಿನೊಂದಿಗೆ ಶಿಕ್ಷಕರ ಅಗತ್ಯವನ್ನು ಆಧರಿಸಿ ಅವುಗಳನ್ನು ರೂಪಿಸುವುದು.

ಮಕ್ಕಳ ಅನುಭವಗಳು ಮತ್ತು ಅವಲೋಕನಗಳ ಮೂರ್ತವಿವರಣೆಗಳನ್ನು ಒಳಗೊಂಡಂತೆ ಲಭ್ಯವಿರುವ ಸಾಮಗ್ರಿಗಳ ಮೂಲ ಗುಚ್ಛವನ್ನು ಸಂದರ್ಭದ ಅಗತ್ಯಗಳಿಗೆ ಅನುಗುಣವಾಗಿ ಸರಿಹೊಂದುವಂತೆ ರೂಪಿಸಬೇಕು. ಸಾಮಗ್ರಿಗಳು ಮತ್ತು ಕಲಿಕೆಯ ಕಾರ್ಯಗಳನ್ನು ಶಿಕ್ಷಕರು ನಿಯಂತ್ರಿಸಿದರೆ (ಮತ್ತು ಸ್ವಲ್ಪ ಮಟ್ಟಿಗೆ ಮಕ್ಕಳಿಂದ) ಮತ್ತು ಪೂರ್ವನಿರ್ಧರಿತ ಹೇರಿಕೆಗಳಾಗಿರದಿದ್ದರೆ ಮಾತ್ರ ಅದು ಸಂಭವಿಸುತ್ತದೆ. ಅಂತಹ ಹೇರಿಕೆಗಳು, ಚೆನ್ನಾಗಿ ಗ್ರಹಿತವಾಗಿದ್ದರೂ ಸಹ, ಶಿಕ್ಷಕರು ಪರಿಣಾಮಕಾರಿಯಾಗಿ ಬಳಸಲಾಗುವುದಿಲ್ಲ ಅಥವಾ ಸಂದರ್ಭಕ್ಕೆ ಹೊಂದಿಕೆಯಾಗುವುದಿಲ್ಲ. ಆದ್ದರಿಂದ ಇವುಗಳನ್ನು ಚೆನ್ನಾಗಿ ಗ್ರಹಿಸುವ ಸಾಧ್ಯತೆಯು ಸ್ವತಃ ಅಪ್ರಾಯೋಗಿಕವಾಗಿದೆ. ಏಕೆಂದರೆ ತರಗತಿಗಳಲ್ಲಿ ಮಕ್ಕಳ ಗುಂಪುಗಳು ಅವರು ತೊಡಗಿಸಿಕೊಳ್ಳುವ, ಸಂವಹನ ಮಾಡುವ ಮತ್ತು ಕಲಿಯುವ ರೀತಿ ಒಂದೇ ರೀತಿಯಾಗಿರಬೇಕು ಎಂದು ನಾವು ನಿರೀಕ್ಷಿಸಲಾಗುವುದಿಲ್ಲ.

**ಪ್ರಸ್ತುತ ಪ್ರವೃತ್ತಿ**

ಪ್ರಸ್ತುತ ಪ್ರವೃತ್ತಿಯು ಇಡೀ ತರಗತಿಯನ್ನು ಒಳಗೊಂಡಿರುವ ಅಂತಹ ರಚನೆಗಳ ಬಳಕೆಯಿಂದ ದೂರವಿಡುವ ಚಲನೆಯಾಗಿದೆ. ವಸ್ತುಗಳ ಬಳಕೆ ಎಂದರೆ, ಅಲ್ಲಿ ಶಿಕ್ಷಕರು ಮತ್ತು ಮಕ್ಕಳು ಜೊತೆಯಾಗಿ ಭಾಗವಹಿಸುವುದು, ಪರಿಕಲ್ಪಿಸುವುದು, ಒಟ್ಟುಗೂಡಿಸುವುದು ಮತ್ತು ಸಾಮಗ್ರಿಗಳನ್ನು ಬಳಸುವುದು. ಆ ಮಾಹಿತಿಯನ್ನು ಅವಲೋಕನಗಳು, ಅನುಭವಗಳು ಮತ್ತು ಮಕ್ಕಳು ವಸ್ತುಗಳು ಮತ್ತು ಪರಿಕಲ್ಪನೆಗಳನ್ನು ನಿರ್ಮಿಸಲು ತಾರ್ಕಿಕ ಸೂತ್ರೀಕರಣಗಳನ್ನು ರಚಿಸಲು ನಿರೀಕ್ಷಿಸುವ ಪ್ರಕ್ರಿಯೆಗಳಿಗೆ ಬಳಸುವುದು ಮತ್ತು ಪ್ರಕ್ರಿಯೆಯಲ್ಲಿ ಅವರಿಗೆ ಹೊಸತಾದ ಮತ್ತು ಪಠ್ಯಪುಸ್ತಕದಲ್ಲಿಲ್ಲದ ಒಳನೋಟಗಳನ್ನು ಕಂಡುಕೊಳ್ಳುವುದು.

ಸಾಮಗ್ರಿಗಳ ಬಗೆಗಿನ ಈ ಅರಿವು ಪರಿಕಲ್ಪನಾ ತಿಳಿವಳಿಕೆಯನ್ನು ಗುರಿಯಾಗಿ ಗುರುತಿಸುವುದರಿಂದ ಹೊರಹೊಮ್ಮಿತು. ಈ ಗುರಿಯು ಮಕ್ಕಳು ತಮ್ಮದೇ ಆದ ವಿವರಣೆಗಳು, ತಮ್ಮದೇ ಆದ ತಾರ್ಕಿಕ ರಚನೆಗಳು ಮತ್ತು ಅಭಿವ್ಯಕ್ತಿಗಳನ್ನು ರೂಪಿಸಲು ಬಯಸುತ್ತದೆ ಆದ್ದರಿಂದ ತಮ್ಮದೇ ಆದ ಉತ್ತರಗಳನ್ನು ಪ್ರಸ್ತುತಪಡಿಸುತ್ತಾರೆ ಎನ್ನುತ್ತದೆ. ಇದು ಕಲಿಕಾ ಸಿದ್ಧಾಂತಿಗಳು ಮತ್ತು ಶಿಕ್ಷಣತಜ್ಞರು ಸೂಚಿಸಿದ ಕೆಲವು ತತ್ವಗಳೊಂದಿಗೆ ವಿಶಾಲವಾಗಿ ಜೋಡಿಸಲ್ಪಟ್ಟಿದೆ. ಇದನ್ನು ನಾವು ತಪ್ಪು ಎಂದು ಕರೆಯಬಹುದು ಆದರೆ, ಮೂರ್ತ ಕಾರ್ಯಾಚರಣೆಯ ಹಂತ ಎಂದರೆ ಮೂರ್ತ ವಸ್ತುಗಳ ಮೇಲೆ ಕೆಲಸ ಮಾಡುವುದು ಮತ್ತು ಇದು ಸಾಮಗ್ರಿಗಳ ಬಳಕೆಯು ಪರಿಕಲ್ಪನೆಗಳನ್ನು ಭಾಗಗಳಾಗಿ ವಿಭಜಿಸಲು ಸಹಾಯ ಮಾಡುತ್ತದೆ ಎಂದು ಮಾತ್ರ ಭಾವಿಸಬೇಕಾಗುತ್ತದೆ.

ಸಾಮಗ್ರಿಗಳ ಬಳಕೆಯ ಮೇಲಿನ ದೃಷ್ಟಿಕೋನಗಳು, ಅವು ಕಲಿಕೆಗೆ ಸಂಪೂರ್ಣ ಸಮರ್ಥವೆನಿಸುವ ಸಾಮಗ್ರಿಗಳು ಮತ್ತು ಶಿಕ್ಷಕರು ಮಾಡಬಹುದಾದುದಕ್ಕೆ ಕೇವಲ ಪೂರಕವಾಗಿರುವವು ಎಂಬೆರಡರ ನಡುವೆ ಇರುತ್ತವೆ. ಈ ಮೊದಲು ಪಠ್ಯಪುಸ್ತಕಗಳು ಮತ್ತು ಗ್ರಂಥಾಲಯಗಳು ಓದಿನ ಸಾಮಗ್ರಿಗಳಾಗಿದ್ದು ಮತ್ತು ಅವುಗಳ ಪರಿಣಾಮಕಾರಿ ಬಳಕೆಯನ್ನು ಖಚಿತಪಡಿಸಿಕೊಳ್ಳುವ ಪ್ರಯತ್ನದಲ್ಲಿ ಸಣ್ಣಸಣ್ಣ ಕಲ್ಲುಗಳು, ಸ್ಟ್ರಾ, ಪ್ರಕೃತಿಯಲ್ಲಿರುವ ವಸ್ತುಗಳು, ಸಣ್ಣ ಕಿಟ್ಗಳು ಮತ್ತು ಈ ರೀತಿಯ ಅಗ್ಗದ ವಸ್ತುಗಳನ್ನು ಬೋಧನಾ ಕಲಿಕಾ ಸಾಮಗ್ರಿ ಎಂದು ಪರಿಗಣಿಸಲಾಗುತ್ತಿದ್ದ ಕಲಿಕಾ ಪಯಣ ಈಗ ವಿಶೇಷವಾಗಿ ಸಿದ್ಧಪಡಿಸಿದ, ವ್ಯವಸ್ಥಿತವಾಗಿ 'ತಜ್ಞರು ಅಭಿವೃದ್ಧಿಪಡಿಸಿದ, ವಸ್ತುಗಳೆಡೆಗೆ ವೇಗವಾಗಿ ಸಾಗಿದೆ'. ಕಲಿಕೆಯ ತತ್ವಗಳು ಮತ್ತು ಮಾರುಕಟ್ಟೆಯ ಲೆಕ್ಕಾಚಾರಗಳಿಂದ ಪ್ರೇರಿತವಾಗಿರುವ ನಂಬಿಕೆಗಳ ನಡುವಿನ ಅಂತರವು ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು ಒಳಗೊಂಡಿರುವ ಉತ್ತಮ ತರಗತಿಯ ತತ್ವಗಳು ಮತ್ತು ವೈಶಿಷ್ಟ್ಯಗಳಿಗೆ ಸಾಕಷ್ಟು ವಿರುದ್ಧವಾದ ವಸ್ತುಗಳ ಬಳಕೆಗೆ ಕಾರಣವಾಗುತ್ತಿದೆ. ಇದು ನಿಸ್ಸಂಶಯವಾಗಿ ಮಕ್ಕಳು ಮತ್ತು ಸಾಮಗ್ರಿಗಳು ಮುಖ್ಯವಾದವು ಮತ್ತು ಶಿಕ್ಷಕರು ಕೇವಲ ಸುಗಮಕಾರರು ಎಂಬ ತಿಳುವಳಿಕೆಯಿಂದ ದೂರವಿರಿಸುವ ಕ್ರಮವಾಗಿದೆ. ಆದರೂ, ಪ್ರಮುಖ ವಿಷಯವೇನೆಂದರೆ ವಾಸ್ತವದಲ್ಲಿ, ನೀತಿಗಳು ಮತ್ತು ಕಾರ್ಯಕ್ರಮಗಳು ಶಿಕ್ಷಕರ ಮೇಲೆ ಹೂಡಿಕೆ ಮಾಡಲು ಬಯಸುವುದಿಲ್ಲ. ಸಾಮಗ್ರಿಗಳ ಮೇಲೆ ಹೆಚ್ಚು ಹೆಚ್ಚು ಹೂಡಿಕೆ ಮಾಡುವುದು, ಉದ್ದೇಶಗಳು ಮತ್ತು ಬೋಧನಾ ವಿಧಾನದ ತತ್ವಗಳನ್ನು ಪರಿಗಣಿಸದೆ ಸಾಮಗ್ರಿಗಳಿಗೆ ಹೆಚ್ಚಿನ ಒತ್ತು ನೀಡಿರುವುದು ಎಲ್ಲವೂ ಭೌತಿಕ, ಹೊಸತು ಮತ್ತು ಮೋಜಿನ ಚಟುವಟಿಕೆಯಾಗಿರಬೇಕು ಎಂಬ ಕಲ್ಪನೆಯೊಂದಿಗೆ ಸಕ್ರಿಯ ತರಗತಿ ಕೊಠಡಿಗಳು ಎಂಬುದನ್ನು ಫ್ಯಾಶನ್ ಪದವನ್ನಾಗಿ ಮಾಡಿದೆ. ಆಟ ಆಡುವುದು, ತೊಡಗಿಸಿಕೊಳ್ಳುವ ಕಲಿಕೆ, ಪ್ರಯೋಗ ಇತ್ಯಾದಿಗಳ ನಡುವಿನ ವ್ಯತ್ಯಾಸಗಳು ಕಳೆದುಹೋಗಿವೆ.

ಶಿಕ್ಷಕರಿಗೆ ಮತ್ತು ಅವರ ಸಿದ್ಧತೆಗಳಿಗೆ ಸಾಕಷ್ಟು ಸಂಪನ್ಮೂಲಗಳು ಇಲ್ಲದಿರುವುದರಿಂದ ಸೂಕ್ತ ಅಗತ್ಯ ವಸ್ತುಗಳನ್ನು ಉತ್ಪಾದಿಸುವುದು ಮಾರ್ಗಸೂಚಿಯಲ್ಲಿರಬೇಕು ಎಂದು ಸ್ಪಷ್ಟವಾಗಿ ಹೇಳುವ ಕೆಲವು ಶಿಕ್ಷಣತಜ್ಞರು ಇದ್ದಾರೆ. ಶಿಕ್ಷಣತಜ್ಞರಾಗಿ ಬಡ್ತಿ ಪಡೆಯುವ

ಅಧಿಕಾರಿಗಳ ಸಮೂಹ ಸಾಮಾನ್ಯವಾಗಿ ಈ ದೃಷ್ಟಿಕೋನದೊಂದಿಗೆ ತಮ್ಮನ್ನು ತಾವೇ ಗುರುತಿಸಿಕೊಂಡು ಅದನ್ನೇ ಪ್ರೋತ್ಸಾಹಿಸುತ್ತಾರೆ. ಶಿಕ್ಷಕರಿಗೆ ಸಹಾಯ/ಮಾರ್ಗದರ್ಶನ/ನಿರ್ದೇಶನಕ್ಕಾಗಿ ಸಾಮಗ್ರಿಗಳು ಮತ್ತು ಕೈಪಿಡಿಗಳನ್ನು ಅಭಿವೃದ್ಧಿಪಡಿಸುತ್ತಿರುವ ಹಲವಾರು ಖಾಸಗಿ ಕಂಪನಿಗಳನ್ನು ಬೆಂಬಲಿಸಲು ಬಹಳಷ್ಟು ಜನ ಇದ್ದಾರೆ. ಶಿಕ್ಷಕರು ಕೇವಲ ತಾವು ಸೂಚಿಸಿದ್ದನ್ನು ಅನುಸರಿಸಬೇಕು ಮತ್ತು ತಮ್ಮ ನಿರ್ದೇಶನದಂತೆ ಸಾಮಗ್ರಿಗಳನ್ನು ಬಳಸಬೇಕು ಎಂಬುದಕ್ಕೆ ಇವು ಒತ್ತು ನೀಡುತ್ತವೆ. ಸಾಮಗ್ರಿಗಳನ್ನು ಈ ರೀತಿಯಲ್ಲಿ ನೋಡುವ ದೃಷ್ಟಿಕೋನವನ್ನು ಅವುಗಳ ಬಳಕೆಯನ್ನು ಖಂಡಿತವಾಗಿಯೂ ಕಲಿಕೆಯ ಅಡಿಪಾಯವಾಗಿ ಮೂರ್ತ ಕಲಿಕೆಯ ಅನುಭವಗಳನ್ನು ಬೆಂಬಲಿಸುವ ತಜ್ಞರು ಸಮ್ಮತಿಸುವುದಿಲ್ಲ.

ಈ ರೀತಿಯಾದ ಸಾಮಗ್ರಿಗಳ ಬಳಕೆಯು, ಉತ್ತಮ ಸಾಮಗ್ರಿಗಳು ಮಕ್ಕಳಿಗೆ ಯಾವುದಿಲ್ಲದಿದ್ದರೂ ಕಲಿಯಲು ಸಹಾಯ ಮಾಡುತ್ತವೆ ಮತ್ತು ಸಾಮಗ್ರಿಗಳ ಮೂಲಕ ಉತ್ತಮವಾಗಿ ನಿರ್ಮಿಸಲಾದ ಚಿಂತನೆಯು ಮಕ್ಕಳನ್ನು ಸ್ವಂತವಾಗಿ ಕಲಿಯುವಂತೆ ಮಾಡುತ್ತದೆ ಎಂಬುದು ರಾಜನೀಕವಾದಿಗಳ ನಿಲುವು. ಸಿದ್ಧಪಡಿಸಿದ ಸಾಮಗ್ರಿಗಳನ್ನು ಬಳಸುವ ಮಕ್ಕಳನ್ನು ಮುಕ್ತವಾಗಿ ಅವನ್ನು ಬಳಸಲು ಬಿಡಬೇಕು ಮತ್ತು ಅದಕ್ಕೆ ಹೆಚ್ಚಿನ ಬೆಂಬಲ ಅಗತ್ಯವಿಲ್ಲ ಎನ್ನುತ್ತದೆ ಈ ವಾದ. ಸಾಮಗ್ರಿಗಳ ಬಳಕೆಗೆ ಒತ್ತು ನೀಡುವುದು ಎರಡು ವಿರುದ್ಧ ಚಿಂತನಾಕ್ರಮ ಹೊಂದಿದ ಗುಂಪುಗಳಿಂದ ಬಂದಿದೆ: ಒಂದು ಗುಂಪು ಮಗುವಿಗೆ ಪುನರಾವರ್ತಿಸಲು, ಅಭ್ಯಾಸ ಮಾಡಲು ಮತ್ತು ಉತ್ತಮವಾಗಿ ನೆನಪಿಟ್ಟುಕೊಳ್ಳಲು ಸಹಾಯ ಮಾಡುತ್ತದೆ ಎಂದು ಹೇಳುತ್ತದೆ ಮತ್ತು ಇನ್ನೊಂದು ಮಕ್ಕಳು ಸ್ವಯಂಪ್ರೇರಿತವಾಗಿ ಕಲಿಯಲು ಸಹಾಯ ಮಾಡುತ್ತದೆ ಎಂದು ಸೂಚಿಸುತ್ತದೆ. ಈ ಎರಡು ಗಂಭೀರ ದೃಷ್ಟಿಕೋನಗಳ ನಡುವೆ ಚರ್ಚೆಗಳು ಸುಳಿದಾಡುತ್ತವೆ, ಆದರೆ ಮೂಲಭೂತವಾಗಿ ಅವು ಒಂದೇ ರೀತಿಯ ಬೇರುಗಳನ್ನು ಹೊಂದಿವೆ, ಏಕೆಂದರೆ ಅವುಗಳು ಬೋಧನಾ ಕಲಿಕಾ ಪ್ರಕ್ರಿಯೆಯು ವೈಯಕ್ತಿಕವಾದುದು, ಸಾಮಾಜಿಕವಾದುದಲ್ಲ ಎಂಬ ಮೂಲ ವಾದವನ್ನೇ ಸೂಚಿಸುತ್ತವೆ. ಮಕ್ಕಳನ್ನು ಕಲಿಕೆಯಲ್ಲಿ ತೊಡಗಿಸುವುದು, ಅವರ ಕಲಿಕೆಯನ್ನು ರೂಪಿಸಲು ಅವರಿಗೆ ಸಹಾಯ ಮಾಡುವುದು, ಅವರೊಂದಿಗೆ ನಿರಂತರವಾಗಿ ಮಾತುಕತೆಯಲ್ಲಿ ತೊಡಗುವುದು, ಅವರ ಮೌಲ್ಯಮಾಪನ ಮಾಡುವುದು, ಅವರನ್ನು ಪ್ರೋತ್ಸಾಹಿಸುವುದು, ಅವರಿಗೆ ಮಾರ್ಗದರ್ಶನ ಮಾಡುವುದು, ಅವರೊಂದಿಗೆ ನಿರಂತರ ಸಂವಾದ ನಡೆಸುವುದು ಮುಂತಾದ, ಶಿಕ್ಷಕರು ಕಲಿಕಾ ಜವಾಬ್ದಾರಿಯನ್ನು ಹೊತ್ತುಕೊಳ್ಳುವ ಅಗತ್ಯಗಳನ್ನು ಸಮಾಧಿ ಮಾಡಲಾಗಿದೆ. ಸಾಮಗ್ರಿಗಳು ವಿಶೇಷವಾಗಿರಬೇಕು ಮತ್ತು ಪರಿಕಲ್ಪನೆ ಹಾಗೂ ವಿನ್ಯಾಸಕ್ಕೆ ಹೆಚ್ಚಿನ ಶ್ರಮ ಮತ್ತು ಹೂಡಿಕೆಯ ಅಗತ್ಯವಿರುತ್ತದೆ ಎಂಬ ಸಲಹೆಯು ಅವುಗಳನ್ನು ಸಣ್ಣ ಪ್ರಮಾಣದಲ್ಲಿ ಅಭಿವೃದ್ಧಿಪಡಿಸಲಾಗುವುದಿಲ್ಲ ಎಂಬುದನ್ನು ಸೂಚಿಸುತ್ತದೆ; ಇದು ಶಿಕ್ಷಕರ ಅಗತ್ಯಗಳ ಆಧಾರದ ಮೇಲೆ ಅವರ ಶಾಲೆಯಲ್ಲಾಗಲಿ ಅಥವಾ ಕ್ಲಸ್ಟರ್ ಮತ್ತು ಬ್ಲಾಕ್ ಮಟ್ಟದಲ್ಲಾಗಲಿ ಕಂಡು ಬರುವ ಬೇಡಿಕೆಯಲ್ಲ. ಎಲ್ಲರಿಗೂ ಉತ್ತಮವಾದುದ್ದನ್ನು ಲಭ್ಯವಾಗುವಂತೆ ಮಾಡಲು ಮತ್ತು ಅವುಗಳ ಉತ್ಪಾದನೆಯನ್ನು ಆರ್ಥಿಕವಾಗಿ ಕೈಗೆಟುಕುವಂತೆ ಮಾಡಲು ಅವುಗಳ ಪರಿಕಲ್ಪನೆ, ಅಭಿವೃದ್ಧಿ ಮತ್ತು ಉತ್ಪಾದನೆಯನ್ನು ಕೇಂದ್ರೀಕರಣಗೊಳಿಸುವ ಕಡೆಗೆ ಒತ್ತಡವಿದೆ. ಆದ್ದರಿಂದ ಅವು ಸಾರ್ವತ್ರಿಕವಾಗಿರಬೇಕು ಮತ್ತು ವ್ಯಾಪಕವಾಗಿ ಅನ್ವಯವಾಗಬೇಕು. ಇವುಗಳನ್ನು ಪರಿಣಾಮಕಾರಿಯಾಗಿ ಬಳಸಲು ಶಿಕ್ಷಕರಿಗೆ ಯಾವುದೇ ಸಿದ್ಧತೆಗಳಿಲ್ಲದೆ ಮತ್ತು ಸಾಮಗ್ರಿಗಳ ಬಹು ಬಳಕೆಯ ಬಗ್ಗೆ ಅವರಿಗೆ ಯಾವುದೇ ತರಬೇತಿಗಳನ್ನು ನೀಡದೆ, ತರಗತಿಗಳಲ್ಲಿ ವಿಭಿನ್ನ ರೀತಿಯಲ್ಲಿ ವಿಭಿನ್ನ ಉದ್ದೇಶಗಳಿಗಾಗಿ ಅವುಗಳನ್ನು ಬಳಸಲು ಅವರಿಗೆ ಸಾಧ್ಯವಾಗುವುದಿಲ್ಲ. ಸಾರ್ವತ್ರಿಕವಾಗಿರುವ ಬೋಧನಾ ಕಲಿಕಾ ಸಾಮಗ್ರಿಗಳ ಬಗೆಗೆ ಚಿಂತಿಸಲು ಮತ್ತು ಅವುಗಳನ್ನು ಅಭಿವೃದ್ಧಿಪಡಿಸಲು ಒತ್ತು ನೀಡಲಾಗಿದೆ. ಸಂವಾದಾತ್ಮಕ ವ್ಯವಸ್ಥೆಗಳು

ವ್ಯಕ್ತಿಗಳ ಕಡೆಗೆ ಸಜ್ಜಾಗಿವೆಯೇ ಹೊರತು ಗುಂಪುಗಳೆಡೆಗಲ್ಲ ಮತ್ತು ಅವುಗಳ ಪ್ರತಿಕ್ರಿಯೆಗಳು ನಮೂದಿಸಿದ ವ್ಯಕ್ತಿಚಿತ್ರಣ/ಪ್ರೊಫೈಲ್‌ಗಳೊಂದಿಗೆ ಸರಿಹೊಂದುತ್ತವೆ.

## ಉಪಸಂಹಾರ

ಬೋಧನಾ ಕಲಿಕಾ ಸಾಮಗ್ರಿಗಳು ಶಿಕ್ಷಕರು ಮತ್ತು ಮಕ್ಕಳಿಗೆ ಸಹಾಯಕ ಸಾಧನಗಳಾಗಿವೆ, ಇಂತಹ ಭಾಗೀದಾರರ ನಡುವೆ ಉದ್ದೇಶದ ಸ್ಪಷ್ಟತೆ ಇಲ್ಲದಿದ್ದರೆ ಸಾಮಗ್ರಿಗಳು ಮಗುವಿನ ಮನಸ್ಸಿನ ವ್ಯಾಯಾಮಕ್ಕೆ ಅಡಚಣೆ ಮಾತ್ರ ಆಗಬಹುದು. ಮಗುವಿನ ಕಲ್ಪನೆಗಳು ಅನೇಕ ನೈಜ ಅನುಭವಗಳು ಮತ್ತು ಪರಿಚಿತ ವಸ್ತುಗಳಲ್ಲಿ ಆಧರಿತವಾಗಿದ್ದರೂ ಅಮೂರ್ತವಾದ ಕಲ್ಪನೆಗಳ ಮರುಸೃಷ್ಟಿಯ ಪ್ರಯತ್ನವನ್ನು ಸಾಮಗ್ರಿಗಳು ಹಿಮ್ಮೆಟ್ಟಿಸಬಹುದು ಎಂಬುದನ್ನು ಗುರುತಿಸುವುದೂ ಸಹ ಮುಖ್ಯವಾಗಿದೆ. ಆದ್ದರಿಂದ ಯೋಚಿಸುವ, ಅಭಿವೃದ್ಧಿಪಡಿಸುವ ಮತ್ತು ಸಾಮಗ್ರಿಗಳ ಬಳಕೆಯನ್ನು ನಿರ್ಧರಿಸುವ ಯೋಜನೆಗೆ ಶಿಕ್ಷಕರು ಕೇಂದ್ರವಾಗಿರದ ಹೊರತು ನಮ್ಮ ತರಗತಿಗಳು ಏಕಮುಖ ವ್ಯವಹಾರವಾಗಿಯೇ ಉಳಿಯುತ್ತವೆ. ಒಂದೇ ಒಂದು ವ್ಯತಿರಿಕ್ತ ಬದಲಾವಣೆ ಎಂದರೆ ಶಿಕ್ಷಕರ ಬದಲಿಗೆ ಈಗ ಅದರ ಸ್ಥಾನದಲ್ಲಿ ವಸ್ತುವಿರುವುದು. ಅದು ಎಲ್ಲಾ ಜ್ಞಾನದ ಮೂಲವಾಗಿದೆ ಮತ್ತು ಕಲಿಯುವವರಿಗೆ ಕಲಿಯಬೇಕಾದ ಉದ್ದೇಶ ಮತ್ತು ವಿಷಯವನ್ನು ಒದಗಿಸುತ್ತದೆ. ಬೋಧನಾ ಕಲಿಕಾ ಸಾಮಗ್ರಿಗಳ ಕುರಿತಾದ ಸಂವಾದವು ಅವುಗಳನ್ನು ಬಳಸುವ ಉದ್ದೇಶದಿಂದ ಮತ್ತು ಶಿಕ್ಷಕರು ಮತ್ತು ಮಕ್ಕಳಿಗೆ ಅವುಗಳ ವಸ್ತು ಮತ್ತು ಪರಿಕಲ್ಪನೆಗೆ ಅವಕಾಶ ನಿಲುಕುವದರಿಂದ ಪ್ರಾರಂಭವಾಗಬೇಕಾಗಿದೆ. ಅವು ಹೇರಿಕೆಯ ಕಲಿಕಾ ಪಥಗಳಾಗಬಾರದು ಮತ್ತು ಕಾರ್ಯಗಳನ್ನು ಯಾಂತ್ರಿಕವಾಗಿ ಅನುಸರಿಸುವಂತೆ ಒತ್ತಡ ಹೇರಬಾರದು.

ಈ ಲೇಖನವನ್ನು ಬರೆಯಲು ಮಾಹಿತಿ ನೀಡಿದ ನಿಮ್ರುತ್ ಕೌರ್, ರಿಚಾ ಗೋಸ್ವಾಮಿ ಮತ್ತು ರಜನಿ ದ್ವಿವೇದಿ ಅವರಿಗೆ ಲೇಖಕರು ಕೃತಜ್ಞತೆಗಳನ್ನು ಅರ್ಪಿಸುತ್ತಾರೆ.

## ಗ್ರಂಥಋಣ

1. Nawani, D. (ed.). (2016). Teaching-learning resources for school education. New Delhi: Sage Publications
2. David Wood & Heather Wood (1996) Vygotsky, Tutoring and Learning, Oxford Review of Education, 22:1, 5-16
3. Dewan, H.K. (2008). TLM vs. Teaching Aids. Buniyadi Shiksha 18: 7-11. (Published by Vidya Bhawan Society and Azim Premji University)
4. Elkind, D. (1976). Child development and Education: A Piagetian Perspective. Oxford University Press. New York.
5. National Council of Educational Research and Training (2005), Learning and Knowledge Chapter 2, New Delhi: NCERT, 12-34 .
6. Lawrence. H.S.S. (1950). Gandhiji's Contribution to Education, The Phi Delta Kappan, Vol. 32, No. 2, pp. 42-44
7. Gowrie, S. (1958). Basic Education in India. Merrill-Palmer Quarterly of Behavior and Development, Vol. 5, No. 1, pp. 46-60
8. Vygotsky, L. (1978). Interaction between Learning and Development. Mind and Society. Cambridge, MA: Harvard University Press, pp. 79-91
9. Piaget, J. (1964). Development and Learning. In: R E Ripple & V N Rockcastle (Eds). Piaget Rediscovered, pp. 7-20

***

**ಹೃದಯಕಾಂತ್ ದಿವಾನ್:** ಇವರು ಪ್ರಸ್ತುತ ಅಜೀಂ ಪ್ರೇಮ್ ಜಿ ವಿಶ್ವವಿದ್ಯಾಲಯದ ಅನುವಾದ ಉಪಕ್ರಮದಲ್ಲಿ ಕೆಲಸ ಮಾಡುತ್ತಿದ್ದಾರೆ. ಏಕಲವ್ಯ ಗುಂಪಿನ ಸ್ಥಾಪಕ

ಸದಸ್ಯರಾಗಿದ್ದಾರೆ ಮತ್ತು ಉದಯಪುರದ ವಿದ್ಯಾಭವನ ಸೊಸೈಟಿಯ ಶೈಕ್ಷಣಿಕ ಸಲಹೆಗಾರರಾಗಿದ್ದಾರೆ. ಕಳೆದ ೪೦ ವರ್ಷಗಳಿಂದ ಶಿಕ್ಷಣ ಕ್ಷೇತ್ರದಲ್ಲಿ ವಿವಿಧ ರೀತಿಯಲ್ಲಿ ಮತ್ತು ವಿವಿಧ ಆಯಾಮಗಳಲ್ಲಿ ಕೆಲಸ ಮಾಡುತ್ತಿದ್ದಾರೆ. ನಿರ್ದಿಷ್ಟವಾಗಿ, ಅವರು ಶೈಕ್ಷಣಿಕ ನಾವೀನ್ಯತೆ ಮತ್ತು ರಾಜ್ಯ ಶೈಕ್ಷಣಿಕ ರಚನೆಗಳ ಮಾರ್ಪಾಡುಗಳಿಗಾಗಿ ನಡೆಸಲಾಗುತ್ತಿರುವ ಪ್ರಯತ್ನಗಳೊಂದಿಗೆ ಸಂಬಂಧ ಹೊಂದಿದ್ದಾರೆ. ಅವರನ್ನು hardy.dewan@gmail.com ನಲ್ಲಿ ಸಂಪರ್ಕಿಸಬಹುದು

ಅನುವಾದ: ಶ್ರೀನಿಧಿ ಅಡಿಗ ಪರಿಶೀಲನೆ: ನಾಗಮಣಿ ಎಸ್.ಎನ್.